# ಕಲಿಕೆಯ ವಿವಿಧ ಹಂತಗಳಲ್ಲಿ ಅಭ್ಯಾಸಗಳು

**ಚಂದ್ರಾ ವಿಶ್ವನಾಥನ್**

ನಾವು ಹೊಸ ವಿಷಯಗಳನ್ನು ಹೇಗೆ ಕಲಿಯುತ್ತೇವೆ ? ಕಲಿಕೆಯು ಶಾಲೆಯಲ್ಲಿ ಪ್ರಾರಂಭವಾಗುತ್ತದೆ ಎಂದು ನಾವು ಅನೇಕರು ಭಾವಿಸುತ್ತೇವೆ. 'ಮಕ್ಕಳು ಶಾಲೆಗೆ ಕಲಿಯಲು ಬರುತ್ತಾರೆ' ಎಂದು ನಾವು ಸಾಮಾನ್ಯವಾಗಿ ಹೇಳಿಬಿಡುತ್ತೇವೆ. ವಾಸ್ತವವೇನೆಂದರೆ ಮಕ್ಕಳು ಹುಟ್ಟಿನಿಂದಲೇ ಕಲಿಯಲಾರಂಭಿಸಿರುತ್ತಾರೆ. ಮೆದುಳು, ನಾವು ಪದೇಪದೇ ಬಳಸದ ಅನಗತ್ಯ ಜೋಡಣೆಗಳನ್ನು ಕಳಚಿ ಹಾಕಿ, ನಾವು ಹೆಚ್ಚು ಹೆಚ್ಚು ಬಳಸುವ ಜೋಡಣೆಗಳನ್ನು ಬಲಗೊಳಿಸುವ ಮೂಲಕ, ನಿರಂತರವಾಗಿ ತನ್ನನ್ನೇ ಮರುರೂಪಿಸಿಕೊಳ್ಳುತ್ತದೆ ಎನ್ನುವುದನ್ನು ಕಳೆದ ಹಲವು ದಶಕಗಳಲ್ಲಿ ನರವಿಜ್ಞಾನ ಸಂಶೋಧನೆಗಳು ಪ್ರತಿಪಾದಿಸಿವೆ. ಬಾಲ್ಯಾವಸ್ಥೆಯಲ್ಲಿ ನಮ್ಮ ಮೆದುಳು ಕಲಿಕೆಯನ್ನು ಅತಿ ಹೆಚ್ಚು ಗ್ರಹಿಸುವ ಶಕ್ತಿಯನ್ನು ಹೊಂದಿರುವುದರಿಂದ, ಆ ಅವಧಿಯಲ್ಲಿ ಇದು ಹೆಚ್ಚಾಗಿ ನಡೆಯುತ್ತದೆ.

ಯಾವುದೇ ಹೊಸ ಪರಿಕಲ್ಪನೆಯನ್ನು ಕಲಿಯಬೇಕಾದರೆ ಹಾಗೂ ಅದನ್ನು ಕರಗತ ಮಾಡಿಕೊಳ್ಳಬೇಕೆಂದರೆ, ನಾವು ಅದಕ್ಕೆ ಮತ್ತೆ ಮತ್ತೆ ಮುಖಾಮುಖಿಯಾಗಬೇಕಾಗುತ್ತದೆ ಹಾಗೂ ಅದನ್ನು ಅನೇಕ ಬೇರೆಬೇರೆ ಕಾರ್ಯರೀತಿಯ ಮಾದರಿಗಳಿಗೆ ಅನ್ವಯಿಸಿ ನೋಡಬೇಕಾಗುತ್ತದೆ ಎನ್ನುವುದನ್ನು ಮಾನವ ಮೆದುಳಿನ ಮೇಲೆ ನಡೆದಿರುವ ಅಧ್ಯಯನಗಳು ಹಾಗೂ ಸಂಶೋಧನೆಗಳು ಹೇಳುತ್ತವೆಆದ್ದರಿಂದಲೇ ವಿವಿಧ ಸ್ವರೂಪದ ಅಭ್ಯಾಸದ ಮಾದರಿಗಳನ್ನು ಹೊಂದಿರುವುದು ಹಾಗೂ ಎಷ್ಟೆಷ್ಟು ಸಲ ಈ ಅಭ್ಯಾಸಗಳನ್ನು ಯಾವ ಅವಧಿಯಲ್ಲಿ ಮಾಡುತ್ತೇವೆ ಎಂಬುದು ಒಂದು ಕೌಶಲ್ಯವನ್ನು ಕಲಿಯುವುದಕ್ಕೆ ಹಾಗೂ ಕರಗತ ಮಾಡಿಕೊಳ್ಳುವುದಕ್ಕೆ ನಿರ್ಣಾಯಕವಾಗಿರುತ್ತದೆ. ಈ ಲೇಖನದಲ್ಲಿ ನಾವು, ಸರ್ವಾಂಗೀಣ ಕಲಿಕೆಗೆ ಅವಶ್ಯಕವಾದಂತಹ ಸರಿಯಾದ ಅಭ್ಯಾಸಗಳನ್ನು ಒದಗಿಸಲು ತರಗತಿಯ ಚಟುವಟಿಕೆಗಳನ್ನು ಹೇಗೆ ವಿನ್ಯಾಸಗೊಳಿಸಬಹುದು ಎನ್ನುವುದಕ್ಕೆ ಇರುವ ಕೆಲವು ಉದಾಹರಣೆಗಳನ್ನು ಚರ್ಚಿಸುತ್ತೇವೆ.

ಕಲಿಕೆಯ ಮೂರು ಹಂತಗಳಲ್ಲಿನ ಕಾರ್ಯ ರೀತಿಗಳು ಅಭ್ಯಾಸಗಳು

-ಬಾಕ್ಸ್-

ಒಂದು ಹೊಸ ಕೌಶಲ್ಯವನ್ನು ಕಲಿಯುವುದು ಮೂರು ಮುಖ್ಯ ಹಂತಗಳನ್ನು ಒಳಗೊಳ್ಳುತ್ತದೆ. ಅವುಗಳೆಂದರೆ, ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳುವುದು, ಕೌಶಲ್ಯವನ್ನು ಅಭಿವೃದ್ಧಿಪಡಿಸಿಕೊಳ್ಳುವುದು ಹಾಗೂ ಅದನ್ನು ಅನ್ವಯಿಸುವುದು. ಪ್ರತಿಯೊಂದು ಹಂತದಲ್ಲೂ ಬೇರೆ ಬೇರೆ ರೀತಿಯ ಅಭ್ಯಾಸದ ಅವಶ್ಯಕತೆ ಇದೆ. ಮಕ್ಕಳು ಮುಂದಿನ ಹಂತಕ್ಕೆ ಹೋಗುವ ಸಡಗರ ಹಾಗೂ ರಭಸವನ್ನು ಉಳಿಸಿಕೊಳ್ಳುತ್ತಲೇ, ಪ್ರತಿ ಹಂತದಲ್ಲೂ ಸಹ ಮಕ್ಕಳು ತೊಡಗಿಕೊಂಡಿರುತ್ತಾರೆ, ಗಮನವನ್ನು ಕೇಂದ್ರೀಕರಿಸುತ್ತಾರೆ ಹಾಗೂ ನಿರ್ದಿಷ್ಟ ತೊಡಕುಗಳನ್ನು ಮೀರುತ್ತಾರೆ ಎಂಬುದನ್ನು ಖಚಿತಪಡಿಸಿಕೊಳ್ಳುವುದು ಶಿಕ್ಷಕರಾಗಿ ನಮ್ಮ ಕೆಲಸವಾಗಿರುತ್ತದೆ.

-ಬಾಕ್ಸ್-

ಇಂಗ್ಲಿಷ್ ಗ್ರಹಿಕೆಗೆ ಸಂಬಂಧಿಸಿದ - ಒಂದು ವಾಕ್ಯವೃಂದವನ್ನು ಗ್ರಹಿಸಿ, ಅದಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರಿಸುವುದನ್ನು ಕಲಿಯುವ, ಒಂದು ಸರಳವಾದ ಕೌಶಲ್ಯದ ಉದಾಹರಣೆಯನ್ನು ತೆಗೆದುಕೊಳ್ಳೋಣ. (ಈ ಉದಾಹರಣೆಯಲ್ಲಿ, ನಮ್ಮ ಶಾಲೆಗಳಲ್ಲಿ ಕಲಿಯುವ ಬಹಳಷ್ಟು ಮಕ್ಕಳು ಇಂಗ್ಲೀಷನ್ನು ಎರಡನೇ ಭಾಷೆಯಾಗಿ ಕಲಿಯುತ್ತಾರೆ. ಮನೆಗಳಲ್ಲಿ ಅದನ್ನು ಕಲಿಯುವುದಕ್ಕೆ ಹೆಚ್ಚಿನ ಅವಕಾಶ ಇರುವುದಿಲ್ಲ ಎಂದುಕೊಂಡಿದ್ದೇವೆ). ಕಲಿಕೆಯ ಪ್ರತಿಯೊಂದು ಹಂತದಲ್ಲೂ ಮಕ್ಕಳು ಪರಿಕಲ್ಪನೆಯನ್ನು ಅರ್ಥ ಮಾಡಿಕೊಂಡು ಈ ಕೌಶಲ್ಯವನ್ನು ಕರಗತ ಮಾಡಿಕೊಳ್ಳಲು ನಾವು ನೀಡುತ್ತಿರುವ ಅಭ್ಯಾಸದ ಮಾದರಿಗಳು ಯಾವುವು ?

## ಹಂತ 1: ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳುವುದು

ಸಾಮಾನ್ಯವಾಗಿ ಮಕ್ಕಳನ್ನು ಓದುವುದನ್ನು ಗ್ರಹಿಸುವುದಕ್ಕೆ ಪರಿಚಯಿಸಲು ನಾವು ಅವರಿಗೆ ಒಂದು ಇಡಿಯಾದ ಕಥೆಯನ್ನು ಓದಲು ಕೊಡುತ್ತೇವೆ ಹಾಗೂ ಕತೆಯನ್ನು ಓದಿದ ನಂತರ ಅವರು ಪ್ರಶ್ನೆಗಳನ್ನು ಉತ್ತರಿಸಬೇಕೆಂದು ಹೇಳುತ್ತೇವೆ. ಹೊಸ ಭಾಷೆಯೊಂದಕ್ಕೆ ಆಗಷ್ಟೇ ಪರಿಚಯಿಸಲ್ಪಡುತ್ತಿರುವ ಮಕ್ಕಳಿಗೆ ಒಂದು ಇಡೀ ಕಥೆಯನ್ನು ಒಡೆದುನೋಡುವುದು, ಅರ್ಥ ಮಾಡಿಕೊಳ್ಳುವುದು ಹಾಗೂ ನೆನಪಿನಲ್ಲಿಟ್ಟುಕೊಳ್ಳುವುದು ಹಾಗೂ ಅದಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರಿಸುವುದು
ಬಹಳ ಕಷ್ಟದ ಕೆಲಸ. ಈ ವಿಧಾನದಲ್ಲಿ ವಿವಿಧ ರೀತಿಯ ಪ್ರಶ್ನೆಗಳನ್ನು ಹೋಲಿಸಿ ನೋಡುವುದಕ್ಕೆ ಅಥವಾ ಅವುಗಳ ಮಾದರಿಗಳನ್ನು ಗುರುತಿಸುವುದಕ್ಕೆ ಮಗುವಿಗೆ ಸಾಧ್ಯವಾಗುವುದಿಲ್ಲ.
ಬದಲಿಗೆ, 'ವಾಕ್ಯವನ್ನು ಗ್ರಹಿಸುವ' ಪರಿಕಲ್ಪನೆಯನ್ನು ಪರಿಚಯಿಸುವ ಮೂಲಕ ನಾವು ಸಮಸ್ಯೆಯನ್ನು ಬಿಡಿಸಬಹುದು. ಇದರಿಂದ ಪ್ರಶ್ನೆಯ ಪದಗಳ ಅರ್ಥವನ್ನು ತಿಳಿದುಕೊಳ್ಳಲು, ಅವುಗಳನ್ನು ಹೋಲಿಸಿ ನೋಡಲು ಹಾಗೂ ಪ್ರತಿಯೊಂದು ಪ್ರಶ್ನೆಯ ಪದಕ್ಕೂ ಬಂದ ಪ್ರತಿಕ್ರಿಯೆಯನ್ನು ವರ್ಗೀಕರಿಸಲು ಮಕ್ಕಳಿಗೆ ಇದು ನೆರವಾಗುತ್ತದೆ.

ಉದಾಹರಣೆಯ ವಾಕ್ಯ 1: ಸಾಯಂಕಾಲ, ಅಜಯ್ ಆಟವಾಡಲು ಮೈದಾನಕ್ಕೆ ಹೋದನು.

ಮೊದಲು ಪ್ರಶ್ನೆಗಳನ್ನು, ವಿವಿಧ ಪ್ರಶ್ನೆಯ ಪದಗಳೊಂದಿಗೆ ಬರೆದುಕೊಳ್ಳಿ ಹಾಗೂ ಪ್ರತಿಯೊಂದು ಪ್ರತಿಕ್ರಿಯೆ ಪದ ಅಥವಾ ಪದಗಳ ಗುಚ್ಛದ ಕೆಳಗೆ ಗೆರೆ ಎಳೆಯಿರಿ.

| ಪ್ರಶ್ನೆ | ಪ್ರತಿಕ್ರಿಯೆ | ಒಂದು ವಾಕ್ಯದಲ್ಲಿ ಪ್ರತಿಕ್ರಿಯೆ ನೀಡುವುದು |
|---|---|---|
| ಯಾರು ಮೈದಾನಕ್ಕೆ ಹೋದರು?. | ಅಜಯ್ | ಅಜಯ್ ಮೈದಾನಕ್ಕೆ ಹೋದನು |
| ಅಜಯ್ ಎಲ್ಲಿಗೆ ಹೋದನು? | ಮೈದಾನ | ಅಜಯ್ ಮೈದಾನಕ್ಕೆ ಹೋದನು |
| ಅಜಯ್ ಯಾವಾಗ ಮೈದಾನಕ್ಕೆ ಹೋದನು? | ಸಾಯಂಕಾಲ | ಅಜಯ್ ಸಾಯಂಕಾಲ ಮೈದಾನಕ್ಕೆ ಹೋದನು |
| ಅಜಯ್ ಏಕೆ ಮೈದಾನಕ್ಕೆ ಹೋದನು? | ಆಟವಾಡಲು | ಅಜಯ್ ಆಟವಾಡಲು ಮೈದಾನಕ್ಕೆ ಹೋದನು |

ಉದಾಹರಣೆ ವಾಕ್ಯ 2: ಕಮಲ ಬೆಳಗ್ಗೆ ತರಕಾರಿ ತರಲು ಮಾರುಕಟ್ಟೆಗೆ ಹೋಗುತ್ತಾಳೆ. ಮಕ್ಕಳಿಗೆ ಇನ್ನೊಂದು ಅಂಥದ್ದೇ ವಾಕ್ಯವನ್ನು ಕೊಟ್ಟು, ಅವರು ಮತ್ತೆ ಒಂದು ಕೋಷ್ಟಕವನ್ನು ಮಾಡಬೇಕೆಂದು ಹೇಳಿ.

| ಪ್ರಶ್ನೆ | ಪ್ರತಿಕ್ರಿಯೆ | ಒಂದು ವಾಕ್ಯದಲ್ಲಿ ಪ್ರತಿಕ್ರಿಯೆ |
|---|---|---|

| | | |
|---|---|---|
| ಯಾರು ಮಾರುಕಟ್ಟೆಗೆ ಹೋಗುತ್ತಾರೆ? | ಕಮಲ | <u>ಕಮಲ</u> ಮಾರುಕಟ್ಟೆಗೆ ಹೋಗುತ್ತಾಳೆ |
| ಕಮಲ ಎಲ್ಲಿಗೆ ಹೋಗುತ್ತಾಳೆ? | ಮಾರುಕಟ್ಟೆಗೆ | ಕಮಲ <u>ಮಾರುಕಟ್ಟೆಗೆ</u> ಹೋಗುತ್ತಾಳೆ |
| ಕಮಲ ಯಾವಾಗ ಮಾರುಕಟ್ಟೆಗೆ ಹೋಗುತ್ತಾಳೆ? | ಬೆಳಿಗ್ಗೆ | ಕಮಲ <u>ಬೆಳಿಗ್ಗೆ</u> ಮಾರುಕಟ್ಟೆಗೆ ಹೋಗುತ್ತಾಳೆ |
| ಕಮಲ ಏತಕ್ಕಾಗಿ ಮಾರುಕಟ್ಟೆಗೆ ಹೋಗುತ್ತಾಳೆ?. | ತರಕಾರಿಗಳನ್ನು | ಕಮಲ <u>ತರಕಾರಿಗಳನ್ನು ಖರೀದಿಸಲು</u> ಮಾರುಕಟ್ಟೆಗೆ ಹೋಗುತ್ತಾಳೆ |

ಎರಡು ಕೋಷ್ಟಕಗಳಲ್ಲಿನ ಪ್ರತಿಕ್ರಿಯೆಗಳನ್ನು ಹೋಲಿಸಿ ನೋಡಲು ಹಾಗೂ ಪ್ರತಿಯೊಂದು ಪ್ರಶ್ನೆಯ ಪದಕ್ಕೂ ಪ್ರತಿಕ್ರಿಯೆಗಳ ವಿಭಾಗವನ್ನು ತಯಾರು ಮಾಡಲು ಮಕ್ಕಳಿಗೆ ಹೇಳಿ. ಪ್ರಶ್ನೆ ಪದದ ಕೋಷ್ಟಕವನ್ನು ತಯಾರಿಸಲು ಅವರಿಗೆ ಸಹಾಯ ಮಾಡಿ.

| ಪ್ರಶ್ನೆ ಪದ | ಪ್ರತಿಕ್ರಿಯಾ ವಿಭಾಗ |
|---|---|
| ಯಾರು. | ವ್ಯಕ್ತಿ |
| ಎಲ್ಲಿ | ಸ್ಥಳ |
| ಯಾವಾಗ | ಸಮಯ |
| ಏಕೆ | ಕಾರಣ |

ಕಲಿಕೆಯ ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳುವ ಹಂತವು, ವಿಶ್ಲೇಷಣೆ, ವಿನ್ಯಾಸವನ್ನು ಗುರುತಿಸುವುದು ಹಾಗೂ ಹೋಲಿಕೆ ಮಾಡಿ ನೋಡುವುದನ್ನು ಒಳಗೊಳ್ಳುತ್ತದೆ. ಈ ಉದಾಹರಣೆಯಲ್ಲಿ ಮಾಡುವ ಅಭ್ಯಾಸ ಚಟುವಟಿಕೆಗಳು ಮಕ್ಕಳು ವಿವಿಧ ಪ್ರಶ್ನೆ ಪದಗಳು ಹಾಗೂ ಪ್ರತಿಕ್ರಿಯೆಗಳನ್ನು ಹೋಲಿಸಿ ನೋಡುವುದನ್ನು, ಅವುಗಳ ಮಾದರಿಗಳನ್ನು ಅರ್ಥಮಾಡಿಕೊಳ್ಳುವುದನ್ನು ಹಾಗೂ ತಾವಾಗಿಯೇ ಪ್ರತಿಕ್ರಿಯೆಯ ವರ್ಗೀಕರಣವನ್ನು ಮಾಡಲು ಕಲಿಯುತ್ತಾರೆ. ಅನೇಕ ಸರಳ ವಾಕ್ಯಗಳ ಮೂಲಕ ಇದನ್ನು ಅವರು ಮತ್ತೆಮತ್ತೆ ಮಾಡಿದಾಗ ಪ್ರಶ್ನೆ ಪದಗಳ ಅರ್ಥವನ್ನು ಹಾಗೂ ಅವುಗಳ ಮಧ್ಯದ ವ್ಯತ್ಯಾಸವನ್ನು ಅರ್ಥ ಮಾಡಿಕೊಳ್ಳುತ್ತಾರೆ.

## ಹಂತ 2: ಕೌಶಲ್ಯವನ್ನು ಬೆಳೆಸುವುದು

ಕೌಶಲ್ಯವನ್ನು ಬೆಳೆಸಿಕೊಳ್ಳುವ ಹಂತವು ಹಲವಾರು ಮಾದರಿಗಳನ್ನು ಅಭ್ಯಾಸ ಮಾಡಿಕೊಳ್ಳುವುದರ ಮೂಲಕ ವಿಶಿಷ್ಟವಾದ ತಂತ್ರಗಳನ್ನು ಕರಗತ ಮಾಡಿಕೊಳ್ಳುವುದನ್ನು ಒಳಗೊಳ್ಳುತ್ತದೆ. ಗ್ರಹಿಸುವ ಕೌಶಲ್ಯಗಳನ್ನು ಬೆಳೆಸಿಕೊಳ್ಳುವ ಈ ಉದಾಹರಣೆಯಲ್ಲಿ, ಅಂದರೆ ನಿರ್ದಿಷ್ಟವಾಗಿ, ಪ್ರಶ್ನೆಗಳಿಗೆ ಕರಾರುವಾಕ್ಕಾದ ಉತ್ತರಗಳನ್ನು ಹೇಳಲು, ವಿವಿಧ ಚಟುವಟಿಕೆಗಳನ್ನು ಒಟ್ಟಿಗೆ ಸೇರಿಸುವ ಮೂಲಕ ಒಂದು ಅಭ್ಯಾಸವನ್ನು ಪರಿಚಯಿಸಬಹುದು. ಇಲ್ಲಿ ಕೆಳಗೆ ಕೆಲವು ಉದಾಹರಣೆಗಳನ್ನು ಕೊಡಲಾಗಿದೆ.

*ಬದಲಿಸಿ (: ಪ್ರತಿಕ್ರಿಯೆಗಾಗಿ ಪ್ರಶ್ನೆ ಪದವನ್ನು ಬರೆಯಿರಿ*

- ಪ್ರತಿಕ್ರಿಯಾ ಪದದ(ಗಳ) ಕೆಳಗೆ ಗೆರೆ ಎಳೆದಿರುವಂತಹ ವಿವಿಧ ಉತ್ತರಗಳನ್ನು ಮಕ್ಕಳಿಗೆ ಕೊಡಿ. ಪ್ರತಿಯೊಂದು ಪ್ರತಿಕ್ರಿಯೆಗೂ, ಸರಿಯಾದ ಪ್ರಶ್ನೆ ಪದದಿಂದ ಬಿಟ್ಟ ಜಾಗವನ್ನು ತುಂಬಲು ಹೇಳಿರಿ.

ಪ್ರಶ್ನೆ: ಮೈದಾನದಲ್ಲಿ_______ಆಡುತ್ತಾರೆ?

ಉತ್ತರ: ಊಟದ ಸಮಯದಲ್ಲಿ ಮಕ್ಕಳು ಮೈದಾನದಲ್ಲಿ ಆಡುತ್ತಾರೆ.

ಪ್ರಶ್ನೆ:  ಊಟದ ಸಮಯದಲ್ಲಿ ಮಕ್ಕಳು __________ಆಟವಾಡುತ್ತಾರೆ?

ಉತ್ತರ: ಮಕ್ಕಳು ಊಟದ ಸಮಯದಲ್ಲಿ ಮೈದಾನದಲ್ಲಿ ಆಡುತ್ತಾರೆ.

*ನಿಮ್ಮದೇ ಆದ ಪ್ರಶ್ನೆಗಳನ್ನು ರಚಿಸಿರಿ*

ಈ ಚಟುವಟಿಕೆಯಲ್ಲಿ ಮಕ್ಕಳು ಪ್ರಶ್ನೆಗಳನ್ನು ಮಾತ್ರ *ರಚಿಸುತ್ತಾರೆ* -ಅವುಗಳಿಗೆ *ಉತ್ತರ ಕೊಡುವ* ಗೋಜಿಗೆ ಅವರು ಹೋಗಬೇಕಾಗಿಲ್ಲ. ಅವರು ಪ್ರಶ್ನೆಗಳ ಮೇಲೆ ಗಮನಹರಿಸುವುದು ಮುಖ್ಯವೇ ಹೊರತು ಉತ್ತರದ ಮೇಲಲ್ಲ. ಇದು ವಿವಿಧ ಸಂದರ್ಭಗಳಲ್ಲಿ ಮಕ್ಕಳು ಪ್ರಶ್ನೆ ಪದಗಳನ್ನು ಬಳಸುವುದನ್ನು ಅಭ್ಯಾಸ ಮಾಡಿಕೊಳ್ಳುವುದಕ್ಕೆ ಅನುವು ಮಾಡಿಕೊಡುತ್ತದೆ. ಮಕ್ಕಳಲ್ಲಿ ವಿಶ್ವಾಸವನ್ನು ಬೆಳೆಸಲು ಈ ಚಟುವಟಿಕೆಯನ್ನು ಗುಂಪುಗಳಲ್ಲಿ ಮಾಡಿಸುವುದು ಬಹಳ ಒಳ್ಳೆಯದು.

- ಮಕ್ಕಳಿಗೆ ಒಂದು ಚಿತ್ರವನ್ನು ತೋರಿಸಿ. ಅದನ್ನು ನೋಡುತ್ತಾ ತಾವೇ ಸ್ವತಃ ಕನಿಷ್ಠ ಮೂರು ಪ್ರಶ್ನೆಗಳನ್ನಾದರೂ ರಚಿಸಲು ಹೇಳಿ. ಪ್ರಶ್ನೆಗಳನ್ನು ರಚಿಸುವಾಗ ಅವರು ತಪ್ಪು ಮಾಡುವುದಕ್ಕೆ ಬಿಡುವುದು ಬಹಳ ಮುಖ್ಯ. ಈ ಹಂತದಲ್ಲಿ ಪ್ರಶ್ನೆ ವ್ಯಾಕರಣ ಶುದ್ಧವಾಗಿ ಇರಬೇಕಾದದ್ದು **ಮುಖ್ಯವಲ್ಲ**. ಮಕ್ಕಳು ವಿವಿಧ ಪ್ರಶ್ನೆ ಪದಗಳನ್ನು ಬಳಸಿ, ಪ್ರಶ್ನೆಗಳನ್ನು ಅರ್ಥಮಾಡಿಕೊಂಡು, ರೂಪಿಸಲು ನೆರವಾಗುವುದಕ್ಕೆ ಮಾತ್ರ ನಾವು ಪ್ರಯತ್ನಿಸುತಿದ್ದೇವೆ.
- ಮಕ್ಕಳಿಗೆ ಒಂದು ವಾಕ್ಯವನ್ನು ಕೊಡಿ (ಚಿತ್ರ ಕೊಡಬಾರದು). ಮತ್ತೊಮ್ಮೆ, ಮಕ್ಕಳು ಅದೇ ವಾಕ್ಯದಿಂದ ತಾವಾಗಿ ಸ್ವತಃ ಮೂರು ಪ್ರಶ್ನೆಗಳನ್ನು ರಚಿಸಬೇಕು.
- ಮಕ್ಕಳಿಗೆ ಮೂರು ಸಾಲಿನ ಒಂದು ವಾಕ್ಯವೃಂದವನ್ನು ಕೊಡಿ. ಆ ವಾಕ್ಯವೃಂದದಿಂದ ತಾವೇ ಸ್ವತಃ 5 ಪ್ರಶ್ನೆಗಳನ್ನು ರಚಿಸಬೇಕೆಂದು ಹೇಳಿ.

*ಮಾತನಾಡುವ ಸಮಯ: ಸಂವಾದದ ಅಭ್ಯಾಸ*
ತಮ್ಮದೇ ಸ್ವಂತ ಪ್ರಶ್ನೆಗಳನ್ನು ರಚಿಸುವುದನ್ನು ಮಕ್ಕಳು ಚೆನ್ನಾಗಿ ಅಭ್ಯಾಸ ಮಾಡಿದ ನಂತರ, ಅವರನ್ನು ಇನ್ನೊಂದು ಹಂತ ಮೇಲಕ್ಕೆ ತೆಗೆದುಕೊಂಡು ಹೋಗಲು ನಾವು ಸಂವಾದ ನಡೆಸುವ ಚಟುವಟಿಕೆಯನ್ನು ಪ್ರಯತ್ನಿಸಬಹುದು. ಈ ಚಟುವಟಿಕೆಗೆ ಮಕ್ಕಳನ್ನು ಇಬ್ಬರಿಬ್ಬರಂತೆ ಜೋಡಿ ಮಾಡಿ. ಪ್ರತಿಯೊಂದು ಜೋಡಿಗೂ, ಒಂದು ಪ್ರಶ್ನೆ ಕಾಣೆಯಾಗಿರುವಂತೆ ಒಂದು ಸಂಭಾಷಣೆ ಕೊಡಿ. ಅವರಿಗೆ ಕೆಲಸ ಸುಲಭ ಮಾಡಲು ಒಂದೋ ನಾವು ಅವರಿಗೆ ಆಯ್ಕೆಗಳನ್ನು ಕೊಡಬಹುದು ಅಥವಾ ಅವರು ತಾವೇ ಸ್ವತಃ ಪ್ರಶ್ನೆಯನ್ನು ರಚಿಸಲು ಬಿಡಬಹುದು. ಸರಿಯಾದ ಪ್ರಶ್ನೆಯಿಂದ ಖಾಲಿ ಇದ್ದ ಸ್ಥಳವನ್ನು ತುಂಬಿದ ನಂತರ ಆ ಸಾಲುಗಳನ್ನು ಒಬ್ಬರು ಇನ್ನೊಬ್ಬರಿಗೆ ಹೇಳುವಂತೆ ಅವರು ಅಭ್ಯಾಸ ಮಾಡಬಹುದು.

ಕೌಶಲ್ಯ ಬೆಳೆಸಿಕೊಳ್ಳುವ ಅಭ್ಯಾಸ ಮಾಡುವುದೆಂದರೆ ಒಂದೇ ರೀತಿಯ ಅಭ್ಯಾಸವನ್ನು ಮತ್ತೆಮತ್ತೆ ಮಾಡುವುದು ಎಂದಲ್ಲ. ಒಂದೇ ಕಲಿಕೆಯ ಗುರಿಯನ್ನು ತಲುಪಲು ಬೇರೆಬೇರೆ ರೀತಿಯಲ್ಲಿ ಅಭ್ಯಾಸ

ಮಾಡುವುದು. ಈ ಪ್ರಕ್ರಿಯೆಯಲ್ಲಿ ನಾವು ಅದೇ ಗಮ್ಯಸ್ಥಾನವನ್ನು ಮುಟ್ಟಲು ಹಲವಾರು ಮಾರ್ಗಗಳಿರುವುದನ್ನು ಕಂಡುಕೊಳ್ಳುತ್ತೇವೆ. ಪರಸ್ಪರ ಕಲಿಸುವುದು, ಗುಂಪು ಚರ್ಚೆಗಳು, ಪಾತ್ರಾಭಿನಯ ಹಾಗೂ ಕಲಾತ್ಮಕ ಅಭಿವ್ಯಕ್ತಿ - ಇವುಗಳು ಕೌಶಲ್ಯವನ್ನು ಬೆಳೆಸಿಕೊಳ್ಳುವುದನ್ನು ಅಭ್ಯಾಸ ಮಾಡಿಕೊಳ್ಳಲು ಇರುವಂತಹ ಅನೇಕ ವಿಧಾನಗಳಲ್ಲಿ ಕೆಲವು ಮಾತ್ರ.

**ವಿನೀತ್**: ನಮ್ಮ ಇಂಗ್ಲಿಷ್ ಕಿರುಪರೀಕ್ಷೆ ಇರುವುದು ಯಾವಾಗ?

**ಉಷಾ**: ಅದು ಇರುವುದು ಶುಕ್ರವಾರ.

**ವಿನೀತ್**: ___________________

**ಉಷಾ**: ಹೌದು, ಆ ಪರೀಕ್ಷೆಗಾಗಿ ನಾನು ಕಳೆದ ವಾರದಿಂದಲೇ ಅಧ್ಯಯನ ಮಾಡಲು ಆರಂಭಿಸಿದೆ.

---

ಸರಿಯಾದ ಪ್ರಶ್ನೆಯನ್ನು ಆಯ್ಕೆ ಮಾಡಿ:

(ಅ) ನಾನು ಅದಕ್ಕೆ ಅಧ್ಯಯನ ಮಾಡಲು ಪ್ರಾರಂಭಿಸಲೇ?

(ಆ) ನೀನು ಅದಕ್ಕೆ ತಯಾರಾಗಲು ಪ್ರಾರಂಭಿಸಿರುವೆಯಾ?

(ಇ) ಅದಕ್ಕೆ ತಯಾರಾಗಲು ನೀನು ನನಗೆ ಸಹಾಯ ಮಾಡುವೆಯಾ?

### ಹಂತ 3: ಅನ್ವಯಿಸುವುದು

ಕಲಿಕೆಯ ಹಂತಗಳನ್ನು ಪೂರ್ಣಗೊಳಿಸಲು, ಮಕ್ಕಳು ಶಾಲೆಯಲ್ಲಿ ಬೆಳೆಸಿಕೊಂಡಿರುವ ಕೌಶಲ್ಯಗಳನ್ನು ವಿವಿಧ ಸನ್ನಿವೇಶಗಳಲ್ಲಿ ಹಾಗೂ ನಿಜ-ಜೀವನದ ಪರಿಸ್ಥಿತಿಗಳಲ್ಲಿ ಬಳಸಬೇಕು. ಇದೊಂದು ಮುಖ್ಯವಾದ ಹೆಜ್ಜೆ, ಏಕೆಂದರೆ ತಾವು ಕಲಿಯುತ್ತಿರುವ ಕೌಶಲ್ಯದ ಪ್ರಯೋಜನವನ್ನು ಅರ್ಥ ಮಾಡಿಕೊಳ್ಳಲು ಕಲಿಕಾರ್ಥಿಗಳಿಗೆ ಅದು ಸಹಾಯ ಮಾಡುತ್ತದೆ. ಒಂದು ವಾಕ್ಯವೃಂದದಲ್ಲಿ ಕಂಡು ಬರುವ ಪ್ರಶ್ನೆಗಳಿಗೆ ಉತ್ತರವನ್ನು ಗ್ರಹಿಸುವ ಕೌಶಲ್ಯಗಳನ್ನು ಬೆಳೆಸುತ್ತಿರುವ ನಮ್ಮ ಸಂದರ್ಭದ ಉದಾಹರಣೆಯಲ್ಲಿ, ತಮ್ಮ ಸುತ್ತಲೂ ಇರುವ ಜನರನ್ನು ಸಂದರ್ಶನ ಮಾಡುತ್ತಾ ತಾವು ಕಲಿತಿರುವ ಕೌಶಲ್ಯಗಳನ್ನು ಅನ್ವಯಿಸಲು ನಾವು ಮಕ್ಕಳಿಗೆ ಹೇಳಬಹುದು. ಶಾಲೆಯಲ್ಲಿ ಶಿಕ್ಷಕರನ್ನು ಹಾಗೂ ಒಬ್ಬರು ಮತ್ತೊಬ್ಬರನ್ನು ಸಂದರ್ಶನ ಮಾಡಬಹುದು ಹಾಗೂ ಅವರ ಪ್ರತಿಕ್ರಿಯೆಗಳನ್ನು ದಾಖಲಿಸಬಹುದು.

ಇಂಗ್ಲಿಷ್ ಅನ್ನು ತರಗತಿಯ ಆಚೆಗೆ ತೆಗೆದುಕೊಂಡು ಹೋಗಲು ಮಕ್ಕಳು ಸಂಜೆ ಮನೆಗೆ ಮರಳಿದ ನಂತರ *ನಡೆದಾಡುತ್ತಾ ಮಾತುಕತೆ (Walk 'n' Talk)* ಎಂಬ ಚಟುವಟಿಕೆಯನ್ನು ನಾವು ಪರಿಚಯಿಸಿದ್ದೇವೆ. ತಮ್ಮ ಮನೆಯ ಸುತ್ತಮುತ್ತಲು ಸಣ್ಣ ಗುಂಪುಗಳಲ್ಲಿ ಅವರು ನಡೆದಾಡುತ್ತ ಇಂಗ್ಲಿಷಿನಲ್ಲಿ ಸರಳವಾದ ಪ್ರಶ್ನೆಗಳನ್ನು ಕೇಳುತ್ತಾ ಅಲ್ಲಿರುವ ಹಿರಿಯರನ್ನು ಸಂದರ್ಶನ ಮಾಡುತ್ತಾರೆ. ಅಂತಹ ಬಹುತೇಕ ಸಮುದಾಯಗಳಲ್ಲಿ ಹಿರಿಯರಿಗೆ ಇಂಗ್ಲಿಷ್ ಬರುವುದಿಲ್ಲ. ಆದ್ದರಿಂದ ಮಕ್ಕಳು ಪ್ರತಿಯೊಂದು ಪ್ರಶ್ನೆಯನ್ನು ತಮ್ಮ ಸ್ಥಳೀಯ ಭಾಷೆಯಲ್ಲಿ ಅನುವಾದ ಮಾಡುತ್ತಾರೆ ಹಾಗೂ ತಮ್ಮ ಪೋಷಕರು ಹಾಗೂ ಇತರ ಹಿರಿಯರು ಇಂಗ್ಲೀಷ್ ನಲ್ಲಿ ಹೇಗೆ ಪ್ರತಿಕ್ರಿಯಿಸಬೇಕೆಂದು ತೋರಿಸಿಕೊಡುತ್ತಾರೆ. ಇದು ಪ್ರತಿಯೊಂದು ಮಗುವೂ ಒಬ್ಬ 'ಶಿಕ್ಷಕ' ಆಗುವಂತೆ ಹಾಗೂ ಹೆಮ್ಮೆಯ ವ್ಯಕ್ತಿಯಾಗುವಂತೆ ಮಾಡುತ್ತದೆ! ಅನ್ವಯಿಸುವುದು ಹಾಗೂ

ಅಭ್ಯಾಸ ಮಾಡುವುದು ಇದರ ಆಚೆಗೂ ಈ ಚಟುವಟಿಕೆಯು ಮಕ್ಕಳಲ್ಲಿ ಆತ್ಮವಿಶ್ವಾಸವನ್ನು ಬೆಳೆಸುತ್ತದೆ.

**ಸರಿಯಾದ ಸಮಯದಲ್ಲಿ ಅಭ್ಯಾಸ**

ಪ್ರತಿಯೊಂದು ತರಗತಿಯಲ್ಲಿ ಅಭ್ಯಾಸ ಚಟುವಟಿಕೆಯನ್ನು ನಾವು ಯಾವಾಗ ಅಳವಡಿಸಬೇಕು? ಪರಿಕಲ್ಪನೆಯನ್ನು ಅರ್ಥ ಮಾಡಿಕೊಳ್ಳುವ ಹಂತದಲ್ಲಿ, ಬೋಧನೆ ಹಾಗೂ ಅಭ್ಯಾಸಗಳನ್ನು ಸಣ್ಣ ಸಣ್ಣ ಅಂತರವಿರುವಂತೆ ಸೇರಿಸಬೇಕು. ಉದಾಹರಣೆಗೆ ಒಬ್ಬ ಶಿಕ್ಷಕರು ಒಂದು ಗಂಟೆಯ ಕಾಲಾವಧಿಯ ತರಗತಿಯಲ್ಲಿ ಮೊದಲ ನಲವತ್ತು ನಿಮಿಷಗಳನ್ನು ವಿಷಯವನ್ನು ಪರಿಚಯಿಸುವುದಕ್ಕೆ ಹಾಗೂ ಮುಂದಿನ 20 ನಿಮಿಷಗಳನ್ನು ಮಕ್ಕಳು ತಾವು ಏನನ್ನು ಕಲಿತಿದ್ದಾರೋ ಅದನ್ನು ಅಭ್ಯಾಸ ಮಾಡುವುದಕ್ಕೆ ನಿಗದಿ ಮಾಡುತ್ತಾರೆ ಎಂದಿಟ್ಟುಕೊಳ್ಳೋಣ. 'ಬೋಧನೆಯ ಸಮಯ'ದಲ್ಲಿ ಎಷ್ಟೊಂದು ವಿಷಯಗಳನ್ನು ತುರುಕಲಾಗುತ್ತದೆ ಎಂದರೆ ಮಕ್ಕಳಿಗೆ ಅದನ್ನು ಮತ್ತೆ ನೆನಪಿಸಿಕೊಳ್ಳುವುದು ಅಥವಾ ತಾವು ಏನನ್ನು ಕಲಿತಿದ್ದಾರೋ ಅದನ್ನು ಅಭ್ಯಾಸದ ಸಮಯದಲ್ಲಿ ಅನ್ವಯಿಸುವುದು ಅಸಾಧ್ಯವಾಗುತ್ತದೆ.

ಇದರ ಬದಲಿಗೆ ಒಂದು ಗಂಟೆಯ ತರಗತಿಯನ್ನು ಚಿಕ್ಕ ಚಿಕ್ಕ ವಿಭಾಗಗಳಾಗಿ ವಿಭಜಿಸಿಕೊಂಡು ಪ್ರತಿಯೊಂದು ವಿಭಾಗವೂ ಬೋಧನೆ ಹಾಗೂ ಅಭ್ಯಾಸವನ್ನು ಹೊಂದಿರಬೇಕು. ಉದಾಹರಣೆಗೆ ಐದು ನಿಮಿಷ ಬೋಧಿಸಿದ ನಂತರ ಐದು ನಿಮಿಷಗಳ ಅಭ್ಯಾಸ ಮಾಡುವುದು, ಹೀಗೆ ಮಾಡಿದರೆ ಪ್ರತಿಯೊಂದು ಪರಿಕಲ್ಪನೆಯೂ ಹೆಚ್ಚು ಸ್ಪಷ್ಟವಾಗುತ್ತದೆ ಹಾಗೂ ಮಗುವಿಗೆ ಅದರ ಜೊತೆ ಸಂಬಂಧ ಕಲ್ಪಿಸಿಕೊಳ್ಳಲು ನೆರವಾಗುತ್ತದೆ.

ಕೌಶಲ್ಯ ಬೆಳೆಸುವ ಹಂತದಲ್ಲಿ ಪ್ರತಿಯೊಂದು ಅಭ್ಯಾಸದ ಚಟುವಟಿಕೆಯೂ ಸಹ 'ಮಾಡು-ಮತ್ತು-ಚರ್ಚಿಸು' ಧೋರಣೆಯನ್ನು ಹೊಂದಿರಬೇಕಾಗುತ್ತದೆ. ಮಕ್ಕಳು ಚಟುವಟಿಕೆಯನ್ನು ಮಾಡಿದ ನಂತರ, ಶಿಕ್ಷಕರು ಆ ವಿಷಯಕ್ಕೆ ಸುತ್ತುವರೆದಂತೆ ಚರ್ಚೆಯನ್ನು ನಡೆಸುತ್ತಾರೆ. ಚರ್ಚೆಯ ಸಮಯವೆಂದರೆ ಅದು ಕೇವಲ ಸರಿಯಾದ ಉತ್ತರಗಳನ್ನು ವಿವರಿಸುವುದಲ್ಲ. ಅದು ಶಿಕ್ಷಕರು ಅಭ್ಯಾಸ ಚಟುವಟಿಕೆಯ ಪರಿಣಾಮಕಾರಿತ್ವದ ಬಗ್ಗೆ ಹಾಗೂ ಅವಶ್ಯಕತೆ ಇದ್ದರೆ ಅದನ್ನು ಮಾರ್ಪಡಿಸಿಕೊಳ್ಳುವುದಕ್ಕಾಗಿ ಪ್ರತಿಕ್ರಿಯೆ ಪಡೆದುಕೊಳ್ಳಲು ಅನುವು ಮಾಡಿಕೊಡುವ ಒಂದು ಪ್ರಮುಖ ಅಂಶವಾಗಿರುತ್ತದೆ. ತರಗತಿಯಲ್ಲಿ ಅದೇ ಕೌಶಲ್ಯವನ್ನು ಕಲಿಯುವ ಹಂತದಲ್ಲಿ ಯಾವ ಮಕ್ಕಳಿಗೆ ಹೆಚ್ಚು ಸಹಾಯ ಬೇಕಾಗುತ್ತದೆ ಎಂದು ಕಂಡುಹಿಡಿದುಕೊಳ್ಳಲು ಹಾಗೂ ಯಾವ ಕಲಿಕಾರ್ಥಿಗಳು ಮುಂದಿನ ಹಂತಕ್ಕೆ ಹೋಗಲು ತಯಾರಾಗಿದ್ದಾರೆ ಎಂದು ತಿಳಿದುಕೊಳ್ಳಲು ನಮಗೆ ಅದು ಒಂದು ಅವಕಾಶ ನೀಡುತ್ತದೆ.

ಇದು ಕೇವಲ *ಸರಿಯಾದ ರೀತಿಯ* ಅಭ್ಯಾಸ ಮಾತ್ರ ಅಲ್ಲ, ಬದಲಿಗೆ ಇದು, ಎಲ್ಲ ಮಕ್ಕಳ ಕಲಿಕೆಯನ್ನು ಹೆಚ್ಚಿಸಲು ಹಾಗೂ ಒಳ್ಳೆಯ ಫಲಿತಾಂಶವನ್ನು ಖಚಿತಪಡಿಸಲು *ಸರಿಯಾದ ಸಮಯದಲ್ಲಿ* ಅಭ್ಯಾಸ ಮಾಡುವುದು ಮತ್ತು ಪ್ರತಿಕ್ರಿಯೆ ಪಡೆದುಕೊಳ್ಳುವುದಾಗಿದೆ.

## ಮೂಲಭೂತ ವಿಷಯಗಳಿಗೆ ಮರಳುವುದು: ಮೂಲಭೂತ ಹಂತದ ಕೌಶಲ್ಯಗಳನ್ನು ಅಭ್ಯಾಸ ಮಾಡುವುದು

ಮಕ್ಕಳು ಪ್ರಾಥಮಿಕ ಶಾಲಾ ಹಂತದಲ್ಲಿ ಕಲಿಯುವ ಮೂಲಭೂತ ಕೌಶಲ್ಯಗಳ ಮೇಲೆ ಮಾಧ್ಯಮಿಕ ಹಾಗೂ ಉನ್ನತ ಶಿಕ್ಷಣದ ಹಂತದಲ್ಲಿ ಕಂಡುಬರುವ ಮಕ್ಕಳ ಸಾಮರ್ಥ್ಯ ಹಾಗೂ ಆತ್ಮವಿಶ್ವಾಸಗಳು ನಿಂತಿರುತ್ತವೆ ಎಂದು ಹಲವಾರು ಅಧ್ಯಯನಗಳು ಸಾಬೀತು ಮಾಡಿವೆ. ಆದ್ದರಿಂದ, ಪ್ರಾಥಮಿಕ ಭಾಷಾ ಕಲಿಕೆ ಹಾಗೂ ಗಣಿತದ ಕೌಶಲ್ಯಗಳನ್ನು ಅಭ್ಯಾಸ ಮಾಡುವುದಕ್ಕೆ ಕೇವಲ ಒಂದು ವರ್ಷ ಎಂದು ನಿಗದಿ ಮಾಡಿರುವ ಸಮಯದಲ್ಲಿ ಮಾತ್ರ ಕಲಿಯುವುದು ಸಾಕಾಗುವುದಿಲ್ಲ. ಮೂಲಭೂತ ಕೌಶಲ್ಯಗಳನ್ನು ಸತತವಾಗಿ ಹಲವಾರು ವರ್ಷಗಳ ಕಾಲ ಅಭ್ಯಾಸ ಮಾಡುವುದು ಅವಶ್ಯಕವಾಗಿದೆ. ಪ್ರತಿ ತರಗತಿಗೆ ಹೋಗುವಾಗಲೂ ಹೊಸದಾದ ಹಾಗೂ ಹೆಚ್ಚು ಸಂಕೀರ್ಣವಾದ ಕೌಶಲ್ಯಗಳನ್ನು ಜಾರಿಗೊಳಿಸಿದಾಗ ಸಹ, ಪ್ರತಿಯೊಂದು ಶಾಲೆಯು ತನ್ನ ವೇಳಾಪಟ್ಟಿಯಲ್ಲಿ ಮೂಲಭೂತ ವಿಷಯಗಳಿಗೆ- ಮರಳುವ ನಿರಂತರ ಅಭ್ಯಾಸದ ಅವಧಿಗಳನ್ನು ನಿಗದಿಪಡಿಸಿರಲೇಬೇಕು.ಅನೇಕ ಶಾಲೆಗಳು ಮಕ್ಕಳು ಮೇಲಿನ ಹಂತದ ಪ್ರಾಥಮಿಕ ಹಾಗೂ ಮಾಧ್ಯಮಿಕ ಹಂತಕ್ಕೆ ಪ್ರವೇಶಿಸುವಾಗ 'ನಿಗದಿತ ಪಠ್ಯಭಾಗಗಳನ್ನು ಮುಗಿಸುವುದು' ಎನ್ನುವುದಕ್ಕೆ ಆದ್ಯತೆ ಕೊಡುತ್ತವೆ. ಅದೇನೇ ಇರಲಿ, ಮಕ್ಕಳ ಮೂಲಭೂತ ಓದುವ

ಹಾಗೂ ಗಣಿತದ ಕೌಶಲ್ಯಗಳಲ್ಲಿ ಅಂತರಗಳಿದ್ದರೆ ಆಗ ಹೆಚ್ಚಿನ ಫಲಿತಾಂಶಗಳನ್ನು ಸಾಧಿಸಲು ಮಾಡುವ ಪ್ರಯತ್ನವು ಅನುಪಯುಕ್ತವಾಗುತ್ತವೆ. ಮೂಲಭೂತ ಕೌಶಲ್ಯಗಳ ಅಭ್ಯಾಸವು ತರಗತಿಗೆ ನಿರ್ದಿಷ್ಟವಾದ ಕೌಶಲ್ಯ ಬೆಳವಣಿಗೆಯ ಜೊತೆಜೊತೆಗೇ ನಡೆದುಕೊಂಡು ಹೋಗಲು ಸಾಧ್ಯವಾಗುವಂತೆ, ಪ್ರತಿಯೊಂದು ಶಾಲೆಯೂ ಇರುವ ಸಮಯವನ್ನು ಹೇಗೆ ಪರಿಣಾಮಕಾರಿಯಾಗಿ ಬಳಸಬಹುದು ಎನ್ನುವುದಕ್ಕೆ ಸರಿಯಾದ ಯೋಜನೆಯನ್ನು ಮಾಡಬೇಕಾಗುತ್ತದೆ,

## ಕೌಶಲ್ಯಗಳನ್ನು ಬೆಳೆಸುವುದು, ಆತ್ಮವಿಶ್ವಾಸವನ್ನು ಬೆಳೆಸುವುದು

ವಿದ್ಯಾರ್ಥಿಗಳು ಒಂದು ಕೌಶಲ್ಯವನ್ನು ಕಲಿಯಲು ಪ್ರಯತ್ನಿಸುವಾಗ, ಪರಿಣಾಮಕಾರಿಯಾದ ಅಭ್ಯಾಸದ ಗುರಿಯು ಕಲಿಕಾರ್ಥಿಗಳ ಆತ್ಮವಿಶ್ವಾಸವನ್ನು ಬೆಳೆಸುವುದಾಗಿದೆ. ಇದನ್ನು ಮಾಡಬೇಕೆಂದರೆ, ಅಭ್ಯಾಸವು ಸರಿಯಾದ ಮಟ್ಟದಲ್ಲಿರಬೇಕಾಗುತ್ತದೆ. ಅದು  ಭರವಸೆ ಹಾಗೂ ಸವಾಲನ್ನು ಸರಿಯಾದ ಪ್ರಮಾಣದಲ್ಲಿ ಒದಗಿಸಬೇಕು. ಮಕ್ಕಳಲ್ಲಿ ಕುತೂಹಲವನ್ನು ಹಾಗೂ ಸಕಾರಾತ್ಮಕ ಆತ್ಮಗೌರವವನ್ನು ಹೆಚ್ಚಿಸುತ್ತಲೇ ಮಕ್ಕಳ ಕಲಿಕೆಯನ್ನು ಸದೃಢಗೊಳಿಸುವ ಉತ್ತಮವಾದ ಅಭ್ಯಾಸ ಚಟುವಟಿಕೆಗಳನ್ನು ಹುಡುಕುವುದು ನಮ್ಮ ಜವಾಬ್ದಾರಿಯಾಗಿದೆ.

ಶಿಕ್ಷಕರ ಕೆಲಸ ಬಹಳ ಕಷ್ಟಕರವಾದುದು. ನಮ್ಮ ಎಷ್ಟೊಂದು ಕಲ್ಪನೆಗಳು ನೆಲಕಚ್ಚಬಹುದು, ಅವುಗಳಲ್ಲಿ ಕೆಲವು ಮಾತ್ರ ಯಶಸ್ವಿಯಾಗಬಹುದು. ಹಾಗಿದ್ದರೂ ಸಹ, ಮಕ್ಕಳಲ್ಲಿ ನಿಜವಾದ ಹಾಗೂ ಆಳವಾದ ಕಲಿಕೆಗೆ ಹುಡುಕಾಟವನ್ನು ಜೀವಂತವಾಗಿಡುವ,  ಮಕ್ಕಳೊಂದಿಗೆ ಅತ್ಯುತ್ತಮವಾಗಿ ಸ್ಪಂದಿಸುವ ಸೂಕ್ತವಾದ ವಿಧಾನಗಳಿಗಾಗಿ ನಾವು ನಮ್ಮ ಹುಡುಕಾಟವನ್ನು ಮುಂದುವರಿಸುವುದು ಬಹಳ ಮುಖ್ಯ.

## ಚಿತ್ರ ಶೀರ್ಷಿಕೆಗಳು

*ಚಿತ್ರ 1. ಕೌಶಲ್ಯಗಳನ್ನು ಬೆಳೆಸುವುದು (ಹಂತ 2), ಇಂತಹ ಚಿತ್ರ ನೋಡಿದ ಮೇಲೆ ವಿದ್ಯಾರ್ಥಿಗಳು ಮೂರು ಪ್ರಶ್ನೆಗಳನ್ನು ರಚಿಸುವಂತೆ ಹೇಳಲಾಯಿತು.*

*ಚಿತ್ರ 2. ಅನ್ವಯಿಸುವುದು (ಹಂತ 3), ಸಮುದಾಯದಲ್ಲಿ ಇಂಗ್ಲಿಷ್ ಮಾತನಾಡುವುದನ್ನು ಮಕ್ಕಳು ಅಭ್ಯಾಸ ಮಾಡುತ್ತಿರುವುದು.*

**ಚಂದ್ರಾ ವಿಶ್ವನಾಥನ್** ಇಎಲ್ಎಫ್ ಲರ್ನಿಂಗ್ ಸಲ್ಯೂಷನ್ಸ್ ನ ಸ್ಥಾಪಕ  ನಿರ್ದೇಶಕರು. ಈ ಸಂಸ್ಥೆಯು ಎಲ್ಲರಿಗೂ, ವಿಶಿಷ್ಟವಾಗಿ ಮೊದಲನೇ ತಲೆಮಾರಿನ ಇಂಗ್ಲಿಷ್ ಕಲಿಯುವವರಿಗೆ, ಇಂಗ್ಲಿಷ್ ಕಲಿಯುವ ಕೌಶಲ್ಯವನ್ನು ಖಚಿತಪಡಿಸುವ ಧ್ಯೇಯಕ್ಕೆ ಬದ್ಧವಾಗಿರುವಂತಹ ಒಂದು ಸಂಸ್ಥೆ. ಈ ಸಂಸ್ಥೆ ಇನ್ನೂರಕ್ಕೂ ಹೆಚ್ಚು ಶಾಲೆಗಳಲ್ಲಿ ಶಿಕ್ಷಕರು ಹಾಗೂ ಮಕ್ಕಳು ಬಳಸುತ್ತಿರುವ ಹಲವಾರು ಇಂಗ್ಲಿಷ್ ಕಲಿಕೆಗೆ ಉಪಯೋಗಿಸುವ ವಸ್ತುಗಳನ್ನು ಸೃಜನಶೀಲವಾಗಿ ಅಭಿವೃದ್ಧಿಪಡಿಸಿದೆ. ಚಂದ್ರಾ ಅವರಿಗೆ ಶೈಕ್ಷಣಿಕ ಸಂಶೋಧನೆ, ಪಠ್ಯಕ್ರಮ, ತರಬೇತಿ ಹಾಗೂ ಸರ್ಕಾರಿ ಶಾಲೆಗಳಲ್ಲಿ ಕಾರ್ಯಕ್ರಮಗಳನ್ನು ಜಾರಿಗೊಳಿಸುವುದರಲ್ಲಿ 20 ವರ್ಷಗಳಿಗೂ ಹೆಚ್ಚಿನ ಅನುಭವ ಇದೆ. ಅವರು ತಮಿಳುನಾಡಿನ ಸರ್ಕಾರಿ ಶಾಲೆಗಳು ಹಾಗೂ ಅನೇಕ ಸರ್ಕಾರೇತರ ಸಂಸ್ಥೆಗಳಿಗೆ, ಸರ್ವ ಶಿಕ್ಷಣ ಅಭಿಯಾನಕ್ಕೆ (ಎಸ್ ಎಸ್ ಎ) ಸಂಬಂಧಿಸಿದ ಒಬ್ಬ ಸಂಪನ್ಮೂಲ ವ್ಯಕ್ತಿ ಹಾಗೂ ಪ್ರಾಥಮಿಕ ಶಿಕ್ಷಣದ ತರಬೇತುದಾರರು. ಅವರನ್ನು chandra.aid@gmail.com ಮೂಲಕ ಸಂಪರ್ಕಿಸಬಹುದು.ಅನುವಾದ – ಜಯಲಕ್ಷ್ಮೀ
ಪರಿಶೀಲನೆ- ಚಂದ್ರಶೇಖರ್ ಮಂಡೆಕೋಲು